# ಕಾನನ

ಜುಲೈ 2015

ನಿಸರ್ಗದೆಡೆಗೆ ಪಯಣ



BANNERUGHATTA
WILDLIFE CONSERVATION GROUP

# ಕಾನನ

ನಿಸರ್ಗದೆಡೆಗೆ ಪಯಣ



# ಜುಲೈ 2015

BANNERUGHATTA WILDLIFE CONSERVATION GROUP



* ಮರಕುಟುಕ ಮತ್ತು ಕಡ್ಡಿಹುಳ
* ಮಾರಕವಾದ ಕೀಟನಾಶಕ
* ಪ್ರಕೃತಿ ಪ್ರರೂಪ
* ಚಾರಣಕ್ಕೆ ಹೋಗೋಣ
* ಪ್ರಕೃತಿ ಬಿಂಬ


ಲೇಖಕರ ವೃಂದ

ಶಂಕರಪ್ಪ .ಕೆ.ಪಿ

ರವಿಚಂದ್ರ .ಎಸ್.ವಿ

ಗೀತಾ .ಆರ್

ಕೃಷ್ಣನಾಯಕ್

ವಿಪಿನ್ ಬಳಿಗ

ವಿನ್ಯಾಸ

ಅಶ್ವಥ .ಕೆ.ಎನ್

ಮುಖಪುಟ ಛಾಯಾಚಿತ್ರ

ವಿಪಿನ್ ಬಳಿಗ



# ಮರಕುಟುಕ ಮತ್ತು ಕಡ್ಡಿಹುಳ

Yellow Crowned Woodpecker

*Leiopicus mahrattensis*

ಮುಂಗಾರು ಮಳೆ ಆರಂಭವಾಗಿ ವಾರವೇ ಕಳೆದಿತ್ತು. ದೋ. . . ಎಂದು ಸುರಿದ ಮಳೆಗೆ ಹಳ್ಳಕೊಳ್ಳಗಳೆಲ್ಲಾ ತುಂಬಿದ್ದವು, ಭೂಮಿ ತಂಪಾಯಿತು. ನೆಲದಾಳದಲ್ಲಿ ಹುದುಗಿದ್ದು ಹುಲ್ಲು ಜೀವತಳೆದು ಹಚ್ಚ ಹಸಿರಿನ ಕುಡಿಹೊಡೆದು ಬಯಲೆಲ್ಲಾ ಹಸಿರಾಯಿತು. ಮಳೆಯಲ್ಲಿ ನೆಂದ ಹಕ್ಕಿಗಳು ಅತ್ತಿತ್ತ ಹಾರಿ ಮೈ ಒದರಿ ಕುಳಿತಿದ್ದವು. ಪಶ್ಚಿಮದಲ್ಲಿ ಸೂರ್ಯ ಮುಳುಗುತ್ತಿದ್ದ.

ವೀಕೆಂಡ್ಗಳಲ್ಲಿ ಫೋಟೋಗ್ರಫಿ ಮಾಡಲು ನಮ್ಮ ಹಳ್ಳಿಗೆ ಬರುವ ವಿಪಿನ್ ನಮಗೆ ನಿಸರ್ಗದ ಹಲವು ಅದ್ಭುತಗಳನ್ನು ಪರಿಚಯಿಸಿದ್ದಾರೆ. ಅಂದು ಸಂಜೆ, ನಮ್ಮ ಗೆಳೆಯರ ಗುಂಪು ಹಾವು ಬಂಡೆಯ ಹಳ್ಳದಲ್ಲಿ ವಿರಾಮವಾಗಿ ಹೊರಟಿತ್ತು, ಅಲ್ಲಲ್ಲಿ ಕಾಣುವ ಹೂಗಳು, ಚಿಟ್ಟೆಗಳು, ಕಪ್ಪೆ, ಹಾವುಗಳು, ಕೀಟ ಸಂಕುಲ ವೃಕ್ಷ ರಾಶಿಯನ್ನು ಕಾಣುತ್ತಾ ಆಸ್ವಾದಿಸುತ್ತಾ ಹಳ್ಳದಲ್ಲೇ ನಡೆದೆವು. ಮರಳು ದಂಧೆಗೆ ಸಿಕ್ಕಿ ಮಲಿನಗೊಂಡು ನಲುಗಿದ್ದ ಹಾವುಬಂಡೆ ಹಳ್ಳ ಈ ಬಾರಿ ಬಿದ್ದ ಬಾರಿ ಮಳೆಗೆ ಹೊಂಡೆಲ್ಲ ಕೊಚ್ಚಿಕೊಂಡು ಹೋಗಿ ಒಂದು ವರ್ಷದಲ್ಲೇ ಮತ್ತೆ ಜೀವಕಳೆ ಪಡೆದುಕೊಂಡಿತ್ತು. "ಅದೋ ಇಲ್ನೋಡಿ ಸ್ಟಿಕ್ ಇನ್ಸೆಕ್ಟ್ ಸೂಪರಾಗಿದ್ದಾನೆ" ಎಂದು ಒಣ ಹುಲ್ಲಿನಲ್ಲಿ ಹುಲ್ಲಾಗಿ ನಿಂತ ಮುಕ್ಕಾಲು ಅಡಿ ಉದ್ದದ ಕಡ್ಡಿ ಹುಳುವನ್ನು ವಿಪಿನ್ ಎಲ್ಲರಿಗೂ ಕರೆದು ತೋರಿಸಿದರು. ನೀಳ ದೇಹದ ಬೂದು ಬಣ್ಣದ ಗೋಧಿ ಆಕಾರದ ಕಣ್ಣುಳ್ಳ ಕಡ್ಡಿ ಹುಳುವನ್ನು ನಮ್ಮೆಲ್ಲರಿಗೂ ಕರೆದು ತೋರಿಸಿದರು. ಕಡ್ಡಿಹುಳ್ಳವನ್ನು ಮುಖಕ್ಕೆ ನೇರಾ ಹಿಡಿದು ಫೋಟೋ ತೆಗೆಸಿಕೊಂಡರು.



ಹರಿಯುವ ಹಳ್ಳಕ್ಕೆ ಅಲ್ಲಲ್ಲಿ ಮಣ್ಣು ಕಲ್ಲುಹಾಕಿ ಸುಮ್ಮನೆ ಕಟ್ಟಿದ್ದ ಒಡ್ಡಿನಲ್ಲಿ ಸ್ವಲ್ಪ ನೀರಿತ್ತು, ಮನೆಯ ಮುಂದೆ ಚುಕ್ಕೆ ಇಟ್ಟು ರಂಗೋಲಿ ಇಟ್ಟಂತೆ ಕಪ್ಪು ಮೊಟ್ಟೆಗಳು ಗುಂಪು



ಗುಂಪು (ಗುಪ್ಪೆ ಗುಪ್ಪೆಯಾಗಿ) ನೀರಿನ ಮೇಲೆ ತೇಲುತ್ತಿದ್ದವು. ಸೂರ್ಯ ಇನ್ನೇನು ಪಶ್ಚಿಮದಲ್ಲಿ ಮುಳುಗುತ್ತಿದ್ದ ಕೆರೆಯ ಅಂಗಳದಲ್ಲಿ ಸ್ವಲ್ಪ ಕಾಲ ಕುಳಿತವು. ದೂರದಲ್ಲಿ ನವಿಲು ಕೂಗುತ್ತಿತ್ತು, ಹಕ್ಕಿಗಳ ಕಲರವವು ಕಪ್ಪೆಗಳ ವಟಗುಟ್ಟುವ ಸಂಗೀತವನ್ನು ಆಲಿಸುತ್ತಾ ಕುಳಿತೆವು. ನಮ್ಮ ಮುಂದೆಯಿಂದ ಒಂದು ಬೋಳಾದ ಕಗ್ಗಲಿ ಮರಕ್ಕೆ ಮೂರು ಪುಟಾಣಿ ಹಕ್ಕಿಗಳು ಕುಳಿತು ಕುಟ ಕುಟ ಕುಟ್ಟಲು ಶುರುಮಾಡಿದವು. ಬಯಲು ಬಯಲಾಗಿದ್ದ ಕುರುಚಲು ಕಾಡಿನಲ್ಲಿ ಕಗ್ಗಲಿ ಮರದ ಮೇಲೆ ಕುಳಿತ್ತಿದ್ದ ಆ ಮೂರು ಹಳದಿ ಕಿರೀಟದ ಚಿಕ್ಕ ಮರಕುಟುಕ ಹಕ್ಕಿಗಳು, ಕಗ್ಗಲಿ ಮರದ ಕೊಂಬೆಯಿಂದ ಕೊಂಬೆಗೆ ಹಾರಿ ಕುಣಿಯುತ್ತಿದ್ದವು. ಕಿಕ್-ಕಿಕ್-ಕಿರ್ ಎಂದು ಕೂಗುತ್ತಿದ್ದವು. ತೊಗಟೆಯ ಕೆಳಗೆ ಅಡಗಿ ಕುಳಿತ ಸಣ್ಣ ಸಣ್ಣ ಕೀಟಗಳನ್ನು ಕುಟ್ಟಿ ಕುಟ್ಟಿ ತಿನ್ನುತ್ತಿದ್ದವು. ಇವು ಕೆಲವೊಮ್ಮೆ ಸಣ್ಣ ಸಣ್ಣ ಹಣ್ಣುಗಳನ್ನು, ಹೂವಿನ ಮಕರಂದವನ್ನು ಹೀರುತ್ತವೆಯಾದರೂ ಕಂಬಳಿ ಹೂಗಳು ಚಿಟ್ಟೆಯ ಲಾರ್ವಗಳನ್ನು ಕಂಡರೆ ಗುಳುಂ ಮಾಡುತ್ತವೆ. ಪೆಬ್ರವರಿ - ಜುಲೈವರೆಗೂ ಒಣಮರದಲ್ಲಿ ಪೊಟರೆ ಕೊರೆದು ಗೂಡುಮಾಡಿ ಮರಿಮಾಡುತ್ತವೆ ಎಂದು ಸಣ್ಣ ಹಕ್ಕಿ- ಆಪ್ ನೋಡಿ ತಿಳಿದುಕೊಂಡೆವು. ಕತ್ತಲಾಗುತ್ತಿದ್ದರಿಂದ ಬೇಗ ಬೇಗ ಮನೆಯ ಕಡೆ ಹೆಜ್ಜೆ ಹಾಕಿದೆವು, ದಾರಿ ಉದ್ದಕ್ಕೂ ಕಳ್ಳಬೇಟೆಗಾರರು ಮೊಲಗಳಿಗೆ ಕಟ್ಟಿದ ಉರುಳುಗಳನ್ನು ಕಿತ್ತು ನಾಶಮಾಡಿ ಬಂದೆವು. ಬೋಳುಮರದ ಮೇಲೆ ಕುಳಿತಿದ್ದ ಆ ಮೂರು ಹಕ್ಕಿಗಳು ಕಿಕ್-ಕಿಕ್-ಕಿರ್ ಕೂಗು ದೂರದಲ್ಲೆಲ್ಲೋ ಕೇಳುತ್ತಿತ್ತು.



- ಶಂಕರಪ್ಪ .ಕೆ .ಪಿ

# ಮಾರಕವಾದ ಕೀಟನಾಶಕ



ಮಕರಂದಕ್ಕಾಗಿ ಜೇನುನೊಣಗಳು ಒಂದು ಹೂವಿನಿಂದ ಮತ್ತೊಂದು ಹೂವಿಗೆ ಹಾರುತ್ತವೆ, ಅವು ಸಂಗ್ರಹಿಸಿದ ಮಕರಂದದಲ್ಲಿ ಹಾನಿಕಾರಕ ಕೀಟನಾಶಕಗಳು ಸೇರಿರುತ್ತವೆ ಜೇನುನೊಣಗಳಿಗೆ ಯಾವ ಮಕರಂದದಲ್ಲಿ ಹಾನಿಕಾರಕ ಕೀಟನಾಶಗಳಿವೆ ಎಂದು ತಿಳಿಯುವುದಿಲ್ಲ, ಏಕೆಂದರೆ ಅವಕ್ಕೆ ರುಚಿ ನೋಡುವ ಗುಣ ಲಕ್ಷಣ ಇರುವುದಿಲ್ಲ. ಹೊಸ ಅಧ್ಯಯನದ ಪ್ರಕಾರ ಕೀಟನಾಶಕಗಳಲ್ಲಿ ಹಾನಿಕಾರಕ ನಿಕೋಟಿನ್ ಅಂಶವಿರುವುದು ತಿಳಿದು ಬಂದಿದೆ.  ಈ ನಿಕೋಟಿನ್ ಜೇನು ನೊಣಗಳನ್ನು ಆಕರ್ಷಿಸುವುದಲ್ಲದೆ, ಇತರ ವನ್ಯ ಕೀಟಗಳನ್ನೂ ಕೂಡ ನಾಶಮಾಡುತ್ತದೆ. ಈ ಕೀಟನಾಶಕಗಳನ್ನು ನಿಕೋಟಿನಾಯಿಡ್ ಎಂದು ಕರೆಯುತ್ತಾರೆ. ಇದನ್ನು ರೈತರು ತಮ್ಮ ಬೆಳೆಗಳ ರಕ್ಷಣೆಗಾಗಿ ಬಳಸುತ್ತಾರೆ. ಇದರಿಂದ ಯಾವುದೋ ಕೆಲವು ಜಾತಿಯ ಕೀಟಗಳ ದಮನಕ್ಕಾಗಿ ಇನ್ನಿತರ ಕೀಟ ಸಂಕುಲಕ್ಕೆ ತೊಂದರೆ ಕೊಡುತ್ತಿದ್ದಾರೆ.

ವಿಜ್ಞಾನಿಗಳು ಜೇನು ನೊಣ ಮತ್ತು ದುಂಬಿಗಳನ್ನು ತಮ್ಮ ಪ್ರಯೋಗಾಲಯಕ್ಕೆ ತಂದು, ಅವುಗಳಿಗೆ ಹೆಚ್ಚಿನ ಪ್ರಮಾಣದ ನಿಯಾನಿಕೊಟಿನಾಯ್ಡುಗಳನ್ನು ಕೊಟ್ಟರು ಆದರೆ ಯಾವುದೇ ತರಹದ ಪ್ರತಿಕ್ರಿಯೆ ಅವರಿಗೆ ಸಿಗಲಿಲ್ಲ, ಕಾರಣ ಜೇನುಗಳಿಗೆ ರುಚಿ ಕಂಡು ಹಿಡಿಯುವ ಲಕ್ಷಣ ಇಲ್ಲ ಎಂದು ಇಂಗ್ಲೆಂಡಿನ ವಿಶ್ವವಿದ್ಯಾನಿಲಯದ ಗೆರಾಡಿಲ್ ರೈಟ್ ರವರು ತಿಳಿಸಿದ್ದಾರೆ.  ಜೇನುನೊಣಗಳು ಕೀಟನಾಶಕ ಬಳಸಿದ ಮಕರಂದಕ್ಕಾಗಿ ಮತ್ತೆ ಮತ್ತೆ ಬರುತ್ತದೆ, ಇದರ ಕಾರಣವನ್ನು ವಿಜ್ಞಾನಿಗಳು ತಿಳಿಯಲು ಎರಡು ಸಕ್ಕರೆ ದ್ರಾವಣವನ್ನು ತೆಗೆದುಕೊಂಡು ಒಂದರಲ್ಲಿ ಕೀಟನಾಶಕವನ್ನು ಮತ್ತೊಂದರಲ್ಲಿ ಸಾಮಾನ್ಯ ದ್ರಾವಣವನ್ನು ಹಾಕಿ ಕೀಟಗಳು ಹೆಚ್ಚಾಗಿ ಕೀಟನಾಶಕಗಳ ದ್ರಾವಣಕ್ಕೆ ಆಕರ್ಷಿತಗೊಳ್ಳುತ್ತವೆ.





*ನಿಯೊನಿಕ್ ಕೀಟನಾಶಕಗಳೂ ಕೂಡ ಹಾನಿಕಾರಕ*

ನಿಯೊನಿಕ್ ದ್ರಾವಣವನ್ನು ತಮ್ಮ ಬೆಳೆಗಳಿಗೆ ಹಾಕುವುದರಿಂದ ಪರಾಗಸ್ಪರ್ಷ ಕ್ರಿಯೆ ಹೆಚ್ಚಾಗಿ ಆಗುತ್ತದೆ ಎಂದು ರೈತರು ಬಳಸುತ್ತಾರೆ. ಆದರೆ 2013 ರಲ್ಲಿ ಯೂರೊಪಿಯನ್ ಯುನಿಯನ್ ಈ ಕೀಟನಾಶಕಗಳನ್ನು ನಿಷೇದಮಾಡಿದ್ದರೂ ಸಹ ಈ ಕೀಟನಾಶಕಗಳ ಪ್ರಯೊಗಕ್ಕೆಂದು 16 ತರಹದ ಬೆಳೆಗಳಿಗೆ ಅರ್ದದಷ್ಟು ಕೀಟನಾಶಕಗಳನ್ನು ಮತ್ತು ಉಳಿದುವುದ್ದಕ್ಕೆ ಯಾವುದೇ ತರಹ ಕೀಟನಾಶಕವನ್ನು ಸಿಂಪಡಿಸದೆ ಪ್ರಯೋಗವನ್ನು ಮಾಡಿದ್ದಾರೆ. ಆಗ ಅವರಿಗೆ ಕಂಡು ಬಂದದ್ದೆಂದರೆ ಈ ಎರಡೂ ತಾಕುಗಳ ಬೆಳೆಗಳ ಯಾವುದೇ ವ್ಯತ್ಯಾಸ ಕಂಡು ಬಂದಿಲ್ಲ, ಆದರೆ ಜೇನು ನೊಣಗಳ ಬೆಳವಣಿಗೆಯಲ್ಲಿ ವ್ಯತ್ಯಾಸ ಕಂಡು ಬಂದಿರುತ್ತದೆ . ಅದೇ ರೀತಿ ದುಂಬಿಗಳ ವಿಷಯದಲ್ಲಿ ಇದು ವಿರುದ್ಧ ಪ್ರಕ್ರಿಯೆಯನ್ನು ತೋರಿರುತ್ತದೆ. ಏನೆಂದರೆ ಕೀಟನಾಶಕಗಳು ಬಳಸಿದ ಬೆಳೆಗಳಲ್ಲಿ ಹೆಚ್ಚಿನ ಬೆಳವಣಿಗೆ ಕಾಣಲಿಲ್ಲ, ಇದನ್ನು ಏಪ್ರಿಲ್ 22, 2013ರ ನೇಚರ್ ಅಂಕಣದಲ್ಲಿ ರುಡಾಲ್ಫ್ ರವರು ಕಂಡುಹಿಡಿದಿದ್ದಾರೆ.

- ರವಿಚಂದ್ರ .ಎಸ್ .ವಿ



# ಪ್ರಕೃತಿ ಪ್ರರೂಪ



ಈ ಮೇಲಿನ ಶೀರ್ಷಿಕೆಯ ಎರಡು ಪದದ ಮೊದಲನೆ ಅಕ್ಷರವು ಒಂದೇ ಅಕ್ಷರದಿಂದ ಪ್ರಾರಂಭವಾಗಿರುವ ಹಾಗೆ, ನಮ್ಮ ಪ್ರಕೃತಿಯಲ್ಲಿ ದಿನನಿತ್ಯ ನೋಡುವ ಕೆಲವು ವಸ್ತುಗಳನ್ನು ಗಮನಿಸಿದಾಗ ಅದರಲ್ಲಿನ ಪ್ರರೂಪಗಳು ನಮಗೆ ಅಚ್ಚರಿವೆನಿಸುತ್ತದೆ. ಪ್ರಕೃತಿಯ ಪ್ರರೂಪಗಳನ್ನು ತಿಳಿಯುವ ಮೊದಲು ಒಬ್ಬ ಗಣಿತಶಾಸ್ತ್ರಜ್ಞನನಾದ "ಫಿಬೋನಚಿ" ರವರು ಕಂಡುಹಿಡಿದ ಸಂಖ್ಯೆಗಳ ಬಗ್ಗೆ ತಿಳಿದುಕೊಳ್ಳೋಣ. ಮೊದಲನೆಯದಾಗಿ ಸೊನ್ನೆ ಮತ್ತು ಒಂದು ಅಂಕಿಯನ್ನು ಕೂಡಿದಾಗ ನಮಗೆ ಒಂದು ಸಿಗುತ್ತದೆ, ಇಲ್ಲಿ ಬಂದ ಮೊತ್ತದ ಜೊತೆ ಅದರ ಹಿಂದಿನ ಅಂಕಿಯನ್ನು ಕೂಡಿಸಿದಾಗ ನಮಗೆ ದೊರಕುವ ಮೊತ್ತ ಎರಡು. ಹೀಗೆ ಈ ಕ್ರಿಯೆಯನ್ನು ಮುಂದುವರಿಸಿಕೊಂಡು ಹೋದರೆ ನಮಗೆ ಸರಣಿ ರೀತಿಯಲ್ಲಿ ಸಂಖ್ಯೆಗಳು ದೊರಕುತ್ತವೆ. ಅವು **0, 1, 1, 2, 3, 5, 8, 13, 21, 34** . . . . . . . . . . . . . . . . . ಈ ರೀತಿಯ ಸರಣಿ ಸಂಖ್ಯೆಗಳನ್ನು " ಫಿಬೋನಚಿ ಸಿರೀಸ್" ಎಂದು ಕರೆಯುತ್ತಾರೆ.

ಈ ಮೇಲಿನ ಸಂಖ್ಯೆಗಳಿಗೂ ಮತ್ತು ನಮ್ಮ ಪ್ರಕೃತಿಗೂ ಏನು ಸಂಬಂಧ ಎಂಬ ಪ್ರಶ್ನೆ ಕಾಡಬಹುದು? ಇದರಲ್ಲೇ ಅಡಗಿದೆ ಆ ಸತ್ಯ . ನೀವು ಸೂರ್ಯಕಾಂತಿ, ಸೇವಂತಿಗೆ ಮತ್ತು ಚೆಂತಾಮಣಿ ಇನ್ನೂ ಮುಂತಾದ ಹೂಗಳ ದಳಗಳನ್ನು ಗಮನಿಸಿದರೆ ಆ ದಳಗಳ ಫಿಬೋನಕ್ಕಿ ಸಂಖ್ಯೆಯನ್ನು ಸರಣಿಯಲ್ಲಿ ಕಾಣಬಹುದು. ಇದೇ ರೀತಿ ದಾಸವಾಳ ಹೂವಿನಲ್ಲೂ ಮತ್ತು ಇದೇ ರೀತಿ ಇನ್ನು ಮುಂತಾದ ಹೂಗಳಲ್ಲಿ ಹೇಮಚಂದ್ರನ ಪವಾಡ ಅಡಗಿದೆ.



ಫಿಬೋನಚಿ ಸರಣಿಯ ಇನ್ನೊಂದು ಜಾದುವೆಂದರೆ  ಈ ಪ್ರತಿಯೊಂದು ಅಂಕಿಯನ್ನು ಚೌಕದ ವಿಸ್ತೀರ್ಣವಾಗಿ ತೆಗೆದುಕೊಂಡು ಚೌಕವನ್ನು ರಚಿಸಿದರೆ, ನಂತರ ಎಲ್ಲಾ ಚೌಕದ ವಿರುದ್ಧ ತುದಿಗಳನ್ನು ಸೇರಿಸಿದರೆ (ಡಿಯಗೊನಲ್ಸ್) ನಮಗೆ ಅಪ್ರದಕ್ಷಿಣೆದಿಶೆ ತಿರುವು ಸಿಗುತ್ತದೆ. ಈ ತರಹ ರಚಿತವಾದ ಚೌಕವನ್ನು "ಗೋಲ್ಡನ್ ರೇಷಿಯೋ" ಎನ್ನುತ್ತಾರೆ. ಇಲ್ಲಿ ರಚಿತವಾದ ತಿರುವಿಗೂ ಮತ್ತು ನಮ್ಮ ನಿಸರ್ಗದಲ್ಲಿ ಕಾಣಸಿಗುವ ಬಸವನ ಹುಳುವಿನ  ಚಿಪ್ಪನ್ನು ಹಾಗೂ ಅನಾನಸ್ ಹಣ್ಣಿನ ಮೇಲಿನ ಪದರವನ್ನು ತ್ತುಪೈನ್ ಕೋನ್ ಗಮನಿಸಿದರೆ ಈ ತರಹದ ಅಪ್ರದಕ್ಷಿಣೆದಿಶೆಯ ಪ್ರರೂಪವನ್ನು ಕಾಣಬಹುದು.






ಈ ತರಹ ರಚಿಸುವುದನ್ನು ಕೆಳಗಿನ ಚಿತ್ರದಲ್ಲಿ ಹಂತಹಂತವಾಗಿ ಗಮನಿಸಬಹುದು .ಉದಾಹರಣೆ:



- ಗೀತಾ .ಆರ್





# ಚಾರಣಕ್ಕೆ ಹೋಗೋಣ



ಮೇರು ಗಿರಿಯ ಏರುವ
ದೂರದ ಕೆರೆಯ ನೋಡುವ
ಊರ ದಾರಿ ಹುಡುಕುವ
ತಂಗಾಳಿಯಲಿ ತೇಲುತ

ಬೆಟ್ಟದ ಹೂವು ನೋಡಲ್ಲಿ
ಗವಿಯ ಬಾಗಿಲ ಬುಡದಲಿ
ತೊರೆಯ ತೀರದಲ್ಲಿ ಸೇರಿ
ಮರಳು ದಡದಿ  ಆಡುವ

ಮೃಗದ ಹೆಜ್ಜೆ ಗುರುತ ನೋಡಿ
ಹೊಸ ಬಣ್ಣದ ಚಿಟ್ಟೆ ಕಂಡು
ಕೀಟಲೋಕಕ್ಕೆ ಹೋಗುವ
ತಂತ್ರ ಯುದ್ಧ ತಿಳಿಯುವ

ಕಾಡ ಮೌನ ದನಿಯ ಕೇಳಿ
ನೆನಪ ಬಿಚ್ಚಿ ಹೇಳುವ
ಅನುಭವದ ಮಾಟ ಹರಡುವ
ಅನ್ವೇಷಣೆಯ ದಾರಿಯಲಿ ಚಲಿಸುವ

ಹಕ್ಕಿಯೊಡನೆ ಕೂಗುವ
ಕಾರೆ ಹಣ್ಣ ಸವಿಯುವ
ಗೆಳೆಯರೊಡನೆ ಸೇರುವ
ಬನ್ನಿ ಚಾರಣಕೆ ಹೋಗೋಣ.

- ಕೃಷ್ಣನಾಯಕ್



# ಪ್ರಕೃತಿ ಬಿಂಬ




ತೊಳಜೇಡವನ್ನೇ ಬೇಟೆಯಾಡಿದ ಜೇಡಕಡಜ




ಹಸಿರೆಲೆಯ ಗೂಡಾಗಿಸಲು ಹೊರಟ ಕೆಂಚಿರುವೆಯ  ದಂಡು

- ವಿಪಿನ್ ಬಳಿಗ